# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1960 |
| ಸದಸ್ಯರ ಹೆಸರು | : | ಶ್ರೀ ಕಾಂತರಾಜ್ (ಬಿಎಂಎಲ್)<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು |

********

| ಕ್ರ.ಸ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯನ್ನು ಯಾವಾಗ ಸ್ಥಾಪಿಸಲಾಯಿತು; ಇದರ ಧ್ಯೇಯೋದ್ದೇಶಗಳೇನು; | ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯು 1959 ರಲ್ಲಿ ಸ್ಥಾಪಿಸಲ್ಪಟ್ಟಿರುತ್ತದೆ.<br><br>**ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಪ್ರಮುಖ ಧ್ಯೇಯೋದ್ದೇಶಗಳು ಈ ಕೆಳಗಿನಂತಿದೆ**<br><br>1. ನಗರ ಪಟ್ಟಣ ಮತ್ತು ಅಭಿವೃದ್ಧಿ ಪಥದಲ್ಲಿ ಇರುವ ಗ್ರಾಮಗಳ ಭೌತಿಕ, ಸಾಮಾಜಿಕ ಹಾಗೂ ಆರ್ಥಿಕ ಸಮೀಕ್ಷಣೆ ಮಾಡಿ ಮಹಾಯೋಜನೆ (ಮಾಸ್ಟರ್ ಪ್ಲಾನ್)ಗಳನ್ನು ಸಿದ್ಧಪಡಿಸುವುದು. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರಡಿ ಈ ಯೋಜನೆಗಳನ್ನು ಸರ್ಕಾರಕ್ಕೆ ಸಲ್ಲಿಸಿ, ಅಂಗೀಕಾರ ಪಡೆಯವುದು.<br><br>2. ಪಟ್ಟಣ ಮತ್ತು ಗ್ರಾಮ ವಿಸ್ತರಣಾ (ಬಡಾವಣೆ) ಯೋಜನೆ, ಅಭಿವೃದ್ಧಿ ಸುಧಾರಣಾ ಯೋಜನೆಗಳು, ಪುನರ್ವಸತಿ ಯೋಜನೆಗಳು; ಆಶ್ರಯ ಯೋಜನೆಗಳು ಮತ್ತಿತರ ಯೋಜನೆಗಳನ್ನು ತಯಾರಿಸುವುದು.<br><br>3. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ/ನಿಯಮಗಳನ್ನು ಅನುಷ್ಠಾನಕ್ಕೆ ತರುವ ವಿಷಯದಲ್ಲಿ ಕರ್ನಾಟಕ ನಗರ ಯೋಜನಾ ಮಂಡಳಿಗೆ ಹಾಗೂ ಯೋಜನೆಗಳನ್ನು ರೂಪಿಸಲು ಮತ್ತು ಕಾರ್ಯಗತಗೊಳಿಸಲು ನಗರಾಭಿವೃದ್ಧಿ ಪ್ರಾಧಿಕಾರಗಳಿಗೆ ಮತ್ತು ನಗರ ಯೋಜನಾ ಪ್ರಾಧಿಕಾರಗಳಿಗೆ ಯೋಜನಾ ವಿಷಯಗಳಿಗೆ ಸಂಬಂಧಿಸಿದಂತೆ ತಾಂತ್ರಿಕ ನೆರವು ನೀಡುವುದು. |

| | | |
|---|---|---|
| | | 4. ರಾಜ್ಯ ಸರ್ಕಾರ ರಚಿಸಿರುವ ಕರ್ನಾಟಕ ಗೃಹ ಮಂಡಳಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಮತ್ತಿತರ ಸಂಸ್ಥೆಗಳಿಗೆ ಯೋಜನಾ ವಿಷಯಗಳಿಗೆ ಸಂಬಂಧಿಸಿದಂತೆ ನೆರವು ನೀಡುವುದು.<br>5. ನಗರ ಮತ್ತು ಗ್ರಾಮಾಂತರ ಯೋಜನಾ ವಿಷಯಗಳಿಗೆ ಸಂಬಂಧಿಸಿದಂತೆ ನಗರಾಭಿವೃದ್ಧಿ ಇಲಾಖೆಗೆ ಸಲಹೆ ಮತ್ತು ತಾಂತ್ರಿಕ ಸಹಾಯ ನೀಡುವುದು.<br>6. ಸರ್ಕಾರಿ ಇಲಾಖೆಗಳು, ಅರೆ ಸರ್ಕಾರಿ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು ಹಾಗೂ ಖಾಸಗಿ ಸಂಸ್ಥೆಗಳಿಗೆ ಕೋರಿಕೆ ಮೇರೆಗೆ ವಿನ್ಯಾಸ ರೂಪಿಸಿ ತಾಂತ್ರಿಕ ಅನುಮೋದನೆ ನೀಡುವುದು.<br>7. ವ್ಯವಸಾಯ ಭೂಮಿಯನ್ನು ವ್ಯವಸಾಯೇತರ ಉದ್ದೇಶಗಳಿಗಾಗಿ ಪರಿವರ್ತಿಸಲು ಕಂದಾಯ ಇಲಾಖೆಗೆ ತಾಂತ್ರಿಕ ಅಭಿಪ್ರಾಯ/ನೆರವು ನೀಡುವುದು. |
| ಆ) | ನಗರ ಪಟ್ಟಣಗಳಿಗೆ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸುವ ಮುಂಚೆಯೇ ಭೂ ಪರಿವರ್ತನೆಯಾದ ಜಮೀನುಗಳನ್ನು ವಿನ್ಯಾಸ ನಕ್ಷೆ ಅನುಮೋದನೆ ಪಡೆಯದೆಯೇ ಅನಧಿಕೃತವಾಗಿ ವಿಭಜಿದ ಸ್ಥಳೀಯ ಸಂಸ್ಥೆಗಳಲ್ಲಿ ಖಾತೆ ತೆರೆದ ನಿವೇಶನಗಳಿಗೆ ಕಟ್ಟಡ ನಿರ್ಮಾಣ ಸಂಬಂಧ ತಾಂತ್ರಿಕ ಅಭಿಪ್ರಾಯ ನೀಡಬಹುದೇ; (ವಿವರವಾದ ಮಾಹಿತಿ ನೀಡುವುದು) | ಸಕ್ಷಮ ಪ್ರಾಧಿಕಾರದಿಂದ ವಿನ್ಯಾಸ ಅನುಮೋದನೆ ಪಡೆಯದೇ ಇರುವ ನಿವೇಶನಗಳಿಗೆ ಸ್ಥಳೀಯ ಸಂಸ್ಥೆಯಲ್ಲಿ ಖಾತಾ ನೀಡಲು ಅವಕಾಶವಿರುವುದಿಲ್ಲ. ಈ ಕುರಿತು ಸರ್ಕಾರದ ಆದೇಶ ಸಂಖ್ಯೆ: ನಅಇ/07/ಟಿಟಿಪಿ/2017, ದಿನಾಂಕ 22.03.2017 ರಲ್ಲಿ ಎಲ್ಲಾ ಸ್ಥಳೀಯ ಸಂಸ್ಥೆಗಳಿಗೆ ಕಟ್ಟುನಿಟ್ಟಿನ ನಿರ್ದೇಶನವನ್ನು ನೀಡಲಾಗಿದೆ ಮತ್ತು ಈಗಾಗಲೇ ಸ್ಥಳೀಯ ಸಂಸ್ಥೆಯಲ್ಲಿ ಸಕ್ಷಮ ಪ್ರಾಧಿಕಾರದಿಂದ ವಿನ್ಯಾಸ ಅನುಮೋದನೆ ಪಡೆಯದೇ ಖಾತಾ ತೆರೆದಿರುವ ನಿವಶನಗಳ ಕಟ್ಟಡ ಪರವಾನಗಿಗೆ ಸಂಬಂಧಿಸಿದಂತೆ ತಾಂತ್ರಿಕ ಅಭಿಪ್ರಾಯ ನೀಡಬಾರದೆಂದು ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶನಾಲಯದ ಸುತ್ತೋಲೆಯ ದಿನಾಂಕ 04.05.2017 ರಲ್ಲಿ ಸೂಕ್ತ ನಿರ್ದೇಶನ ನೀಡಲಾಗಿರುತ್ತದೆ. |
| ಇ) | ಒಂದು ವೇಳೆ ಅಭಿಪ್ರಾಯ ನೀಡಬಾರದಾಗಿದ್ದರೆ ಇದಕ್ಕೆ ಕಾರಣಗಳೇನು; (ವಿವರವಾದ ಮಾಹಿತಿ ನೀಡುವುದು) | ನಗರ ಪ್ರದೇಶಗಳಲ್ಲಿ ಭೂ ಪರಿವರ್ತಿಸಿದ/ಭೂ ಪರಿವರ್ತಿಸದ ಜಮೀನುಗಳಿಗೆ ವಿನ್ಯಾಸ ಅನುಮೋದನೆ ಪಡೆಯದೇ ಅನಧಿಕೃತ ಬಡಾವಣೆ/ರೆವೆನ್ಯೂ ಬಡಾವಣೆಗಳನ್ನು ನಿರ್ಮಾಣ ಮಾಡಿ, ನಿವೇಶನಗಳನ್ನು ನೋಂದಣಿ ಮಾಡಿಕೊಂಡು ಕಟ್ಟಡಗಳನ್ನು ಅಕ್ರಮವಾಗಿ ನಿರ್ಮಿಸುವುದರಿಂದ ನಗರ ಪ್ರದೇಶಗಳಲ್ಲಿ |

| | | |
|---|---|---|
| | | ಉದ್ಯಾನವನ/ಬಯಲು ಜಾಗೆಗಳ ಕೊರತೆ, ನಾಗರೀಕ ಸೌಲಭ್ಯಗಳನ್ನು ಕಲ್ಪಿಸುವಲ್ಲಿ ವಿಫಲತೆ, ವ್ಯವಸ್ಥಿತವಾದ ರಸ್ತೆಯ ಪರಿಚಲನೆ, ಮೂಲಭೂತ ಸೌಕರ್ಯದ ಕೊರತೆ ಹಾಗೂ ಯೋಜಿತ ಬೆಳವಣಿಗೆಗಳಲ್ಲಿ ತೊಡಕುಗಳು ಉಂಟಾಗುತ್ತವೆ. ಈ ಹಿನ್ನೆಲೆಯಲ್ಲಿ ವಿನ್ಯಾಸಗಳಿಗೆ ಸಕ್ಷಮ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯದೆ ನಿವೇಶನಗಳನ್ನು ರಚಿಸಿ ಪರಭಾರೆ ಮಾಡುವ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ತಡೆಯುವ ಉದ್ದೇಶದಿಂದ ಸರ್ಕಾರವು ದಿನಾಂಕ 22.03.2017 ರಂದು ಸುತ್ತೋಲೆ ಹೊರಡಿಸಿರುತ್ತದೆ. |
| ಈ) | ಈ ನಿವೇಶನಗಳನ್ನು ಯಾವಾಗ ಸಕ್ರಮ ಮಾಡಲಾಗುವುದು? | ಸ್ಥಳೀಯ ಯೋಜನಾ ಪ್ರದೇಶ ಘೋಷಣೆಯಾಗುವ ಪೂರ್ವದಲ್ಲಿ ಅನಧಿಕೃತ ನಿವೇಶನಗಳಿಗೆ ಖಾತಾ ನೀಡಿರುವ ಪ್ರಕರಣಗಳಿಗೆ ಕಟ್ಟಡ ಪರವಾನಿಗೆ ನೀಡುವ ಕುರಿತು ಪರಿಶೀಲಿಸಲು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಅಧ್ಯಕ್ಷತೆಯಲ್ಲಿ ಸಚಿವ ಸಂಪುಟದ ಉಪಸಮಿತಿಯನ್ನು ರಚಿಸಿದ್ದು, ಸದರಿ ಸಮಿತಿಯು ಕೈಗೊಳ್ಳುವ ನಿರ್ಣಯದ ನಂತರ ಈ ಬಗ್ಗೆ ಪರಿಶೀಲಿಸಲಾಗುವುದು. |

**ಸಂಖ್ಯೆ: ನಅಇ 139 ಮೈಅಪ್ರಾ 2021**

**(ಬಿ.ಎ. ಬಸವರಾಜ)**
ನಗರಾಭಿವೃದ್ಧಿ ಸಚಿವರು